ಕೆ. ಉಮಾದೇವಿ

# ಅಹಲ್ಯಾ-ಇಂದ್ರ ಕಥೆಯನ್ನು ನಿರೂಪಿಸುವ ಪಟ್ಟದಕಲ್ಲಿನ ಕುತೂಹಲಕಾರಿ ಶಿಲ್ಪ

ಬಾದಾಮಿ ಚಾಲುಕ್ಯ ದೊರೆ ಇಮ್ಮಡಿ ವಿಕ್ರಮಾದಿತ್ಯನ ಆಡಳಿತಾವಧಿಯಲ್ಲಿ ನಿರ್ಮಾಣಗೊಂಡ ಪಟ್ಟದಕಲ್ಲಿನ (೭೩೩_೪೪) ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳ ಕಂಬಗಳು ರಾಮಾಯಣ, ಮಹಾಭಾರತ, ಪುರಾಣ, ಪಂಚತಂತ್ರ ಮುಂತಾದ ಕೃತಿಗಳನ್ನಾಧರಿಸಿದ ನಿರೂಪಣಾತ್ಮಕ ಕಥಾನಕ ಶಿಲ್ಪಗಳಿಂದ ಅಲಂಕಾರಗೊಂಡಿವೆಯೆಂಬುದು ಸರ್ವವಿದಿತ.[1] ಇವುಗಳಲ್ಲಿ ಅನೇಕ ಶಿಲ್ಪಗಳು ನಿರೂಪಿಸುವ ಕಥೆಗಳಾವವು ಎಂಬುದನ್ನು ಈಗಾಗಲೇ ನಿರ್ಧರಿಸಲಾಗಿದ್ದರೂ ಕೆಲವು ಗುರುತಿಸಲಾರದೇ ಉಳಿದುಕೊಂಡಿವೆ. ಕೆಲವು ಶಿಲ್ಪಗಳ ಕೆಳಗೆ ಕಥೆಗಳ ಪಾತ್ರಗಳನ್ನು ಶಾಸನಗಳಿಂದ ಸೂಚಿಸಲಾಗಿದೆ. ಅಂಥದೊಂದು ನಿರೂಪಣಾ ಶಿಲ್ಪ ಅಹಲ್ಯೆ ಮತ್ತು ಇಂದ್ರರನ್ನು ಕುರಿತದ್ದಾಗಿದೆ.

ಈ ಶಿಲ್ಪ ವಿರೂಪಾಕ್ಷ ದೇವಾಲಯದ ಸಭಾಮಂಟಪದ ವಾಯುವ್ಯ ಭಾಗದಲ್ಲಿರುವ ಎರಡನೇ ಕಂಬದ ದಕ್ಷಿಣ ಮತ್ತು ಪೂರ್ವ ಮುಖಗಳಲ್ಲಿ ಕಂಡುಬರುತ್ತದೆ. ಅದರ ವಿವರವನ್ನು ಹೀಗೆ ಕೊಡಬಹುದು :

**ಕಂಬದ ದಕ್ಷಿಣ ಮುಖ :** (ಚಿತ್ರ-೧) (ನೋಡುವವರ ಎಡದಿಂದ ಬಲಕ್ಕೆ)–

೧. **ಮೇಲ್ಭಾಗದ ಪಟ್ಟಿಕೆ :** ತಿಲೋತ್ತಮೆ ಕುಳಿತಿದ್ದಾಳೆ ಹಾಗೂ ಇಂದ್ರ ಮತ್ತು ವಜ್ರ ಅವಳೆಡೆಗೆ ಸಾಗಿ ಬರುತ್ತಿದ್ದಾರೆ ; ತಿಲೋತ್ತಮೆ ತನ್ನ ಎಡಕ್ಕೆ ಸಾಗುತ್ತಿದ್ದಾಳೆ ; ತಿಲೋತ್ತಮೆ ಮತ್ತು ಅಹಲ್ಯೆ ಕಟ್ಟೆಯ ಮೇಲೆ ಮಾತನಾಡುತ್ತ ಕುಳಿತಿದ್ದಾರೆ.

೨. **ಕೆಳಪಟ್ಟಿಕೆ :** ಪರಿಚಾರಕರ ಮಧ್ಯೆ ಮನೆಯೊಂದರಲ್ಲಿ ಇಂದ್ರ-ವಜ್ರರು ಕುಳಿತಿದ್ದಾರೆ ; ತಿಲೋತ್ತಮೆ ಅವರೆಡೆಗೆ ಸಾಗಿಬರುತ್ತಿದ್ದಾಳೆ ; ಬಾಗಿಲು ಕಾಯಲು ವಿಶಿಷ್ಟ ರೀತಿಯ ವಸ್ತ್ರಧಾರಿಯಿದ್ದಾನೆ ; ತಿಲೋತ್ತಮೆ ಇಂದ್ರ-ವಜ್ರರೊಂದಿಗೆ ಮಾತನಾಡುತ್ತಿದ್ದಾಳೆ.

**ಕಂಬದ ಪೂರ್ವ ಮುಖ :** (ಚಿತ್ರ-೨)-

೧. **ಮೇಲ್ಭಾಗದ ಪಟ್ಟಿಕೆ :** ಅರ್ಧವೃತ್ತಾಕೃತಿಯಲ್ಲಿ ಋಷಿಗಳ ಸಹಿತ ಆಶ್ರಮ. ಇದರ ಕೆಳಗೆ ಪಟ್ಟಿಕೆಯಲ್ಲಿ ಮರದಡಿಯಲ್ಲಿ ಮಲಗಿ ವಿಶ್ರಮಿಸುತ್ತಿರುವ ಸ್ತ್ರೀ; ತನ್ನ ಎಡಬದಿಗೆ ಚಲಿಸುತ್ತಿರುವ ಸ್ತ್ರೀ ; ಅಲ್ಲಿ ಇಬ್ಬರು ವ್ಯಕ್ತಿಗಳು ಮಾತನಾಡುತ್ತ ಕುಳಿತಿದ್ದಾರೆ. ಇವರು ಋಷಿಗಳಂತೆ ಕಾಣುತ್ತಾರೆ.

೨. **ಕೆಳಪಟ್ಟಿಕೆ :** ಇಂದ್ರ ಮತ್ತು ತಿಲೋತ್ತಮೆ ಮಾತನಾಡಿಕೊಳ್ಳುತ್ತಿದ್ದಾರೆ ; ತಿಲೋತ್ತಮೆ ತನ್ನ

---

1 ರಾಮಾಯಣ ಮಹಾಭಾರತದ ಕಥೆಗಳಲ್ಲದೆ, ಭಾಗವತ ಪುರಾಣದಿಂದಾಯ್ದು, ಮುಖ್ಯವಾಗಿ ಕೃಷ್ಣಚರಿತೆಯ ನಿರೂಪಣಾತ್ಮಕ ಶಿಲ್ಪಪಟ್ಟಿಕೆಗಳು ಈ ಕಂಬಗಳ ಮೇಲೆ ಕಂಡುಬರುತ್ತವೆ. ಪಂಚತಂತ್ರದಿಂದಾಯ್ದು ಟಿಟ್ಟಿಭಸಮುದ್ರ ಕಥೆ, ಮಂಗ ಮತ್ತು ಕೀಲಿನ ಕಥೆ, ಮಂಗ ಮತ್ತು ಮೊಸಳೆಯ ಕಥೆ ಮುಂತಾದವೂ ಯಶೋಧರಚರಿತೆಯ ಕಥೆಯೂ ಈಗಾಗಲೇ ಗಮನಿಸಲ್ಪಟ್ಟಿವೆ.

ಎಡಕ್ಕೆ ಚಲಿಸುತ್ತಿದ್ದಾಳೆ ; ಇಂದ್ರ-ತಿಲೋತ್ತಮೆಯರು ಸಾಗುತ್ತಿದ್ದಾರೆ ; ಇಂದ್ರ-ಅಹಲ್ಯೆಯರು ಒಬ್ಬರನ್ನೊಬ್ಬರು ತಬ್ಬಿಕೊಂಡಿದ್ದಾರೆ.

ಇಂದ್ರ-ಅಹಲ್ಯೆಯರ ಕಥೆಯು ವಿವಿಧ ನಿರೂಪಣೆಗಳು ರಾಮಾಯಣ,[2] ಬ್ರಹ್ಮಪುರಾಣ,[3] ಕಥಾಸರಿತ್ಸಾಗರ[4] ಗಳಲ್ಲಿ ಕಂಡುಬರುತ್ತವೆಯಲ್ಲದೆ ಮಹಾಭಾರತದಲ್ಲಿಯೂ[5] ಉಲ್ಲಿಖಿತವಾಗಿದೆ. ಆದರೆ ಈವರೆಗೆ ನಾವು ಗಮನಿಸಿರುವ ನಿರೂಪಣೆಗಳಲ್ಲಿ ತಿಲೋತ್ತಮೆಯಾಗಲೀ ವಜ್ರನಾಗಲೀ ಯಾವುದೇ ಪಾತ್ರವಹಿಸಿದಂತೆ ಕಂಡುಬಂದಿಲ್ಲ. ಋಷಿ ಗೌತಮನು ಇಂದ್ರನಿಗೆ ಶಾಪವಿತ್ತಾಗ ಅವನ ಮೈಯಲ್ಲಿ ಸಾವಿರ ಕುರೂಪಿ ಚಿನ್ಹೆಗಳು ಕಾಣಿಸಿಕೊಂಡವೆಂದೂ ಅವು ಇಂದ್ರನು ತಿಲೋತ್ತಮೆಯನ್ನು ನೋಡಿದಾಗ ಸಾವಿರ ಕಣ್ಣುಗಳಾಗಿ ಮಾರ್ಪಟ್ಟವೆಂದೂ ಕಥಾಸರಿತ್ಸಾಗರದಲ್ಲಿ ಉಲ್ಲೇಖವಿದೆ.[6]

ಪ್ರಸ್ತುತ ಶಿಲ್ಪ ನಿರೂಪಿಸುವ ಕಥೆ ಬಹುಶಃ ಈ ಕೆಳಗಿನಂತಿದೆ :

ಇಂದ್ರನು ತನ್ನ ಆಯುಧವಾದ ವಜ್ರದೊಂದಿಗೆ (ಮಾನವಾಕೃತಿ)ತಿಲೋತ್ತಮೆಯೆಡೆಗೆ ಹೋಗಿ ಅಹಲ್ಯೆಗೆ ತನಗವಳಲ್ಲಿ ಉಂಟಾಗಿರುವ ಅನುರಾಗವನ್ನು ತಿಳಿಸುವಂತೆ ಕೇಳಿಕೊಳ್ಳುತ್ತಾನೆ. ಅಹಲ್ಯೆಗೆ ವಿಷಯ ತಿಳಿಸಿದ ತಿಲೋತ್ತಮೆ ಮರಳಿ ಇಂದ್ರನೆಡೆಗೆ ಬಂದು ಅವನನ್ನು ಗೌತಮ ಋಷಿಯ ಆಶ್ರಮಕ್ಕೆ ಕರೆದೊಯ್ಯುತ್ತಾಳೆ. ಅಲ್ಲಿ ಋಷಿಯ ವೇಷದಲ್ಲಿ ಇಂದ್ರ ಅಹಲ್ಯೆಯೊಡನೆ ಕೂಡಿಕೊಳ್ಳುತ್ತಾನೆ.

ನಾವು ಇಲ್ಲಿ ಶಿಲ್ಪ-ಕಥಾನಕವನ್ನು ಈ ರೀತಿ ಅರ್ಥವಿಸುವದು ಸರಿಯಿದ್ದರೆ, ಇದರಿಂದ ಮುಖ್ಯ ಸಂಗತಿಯೊಂದು ಸೂಚಿತವಾಗುತ್ತದೆ : ಚಾಲುಕ್ಯ ಶಿಲ್ಪಿಗಳು ಅಹಲ್ಯಾ-ಇಂದ್ರ ಕಥೆಯ ಬೇರೆ ಆವೃತ್ತಿಯನ್ನು ಈ ಶಿಲ್ಪದಲ್ಲಿ ಬಳಸಿದ್ದಾರೆ. ಆ ಆವೃತ್ತಿ ನನಗೆ ತಿಳಿದಿರುವ ಮಟ್ಟಿಗೆ ಸದ್ಯ ಲಭ್ಯವಿರುವ ಸಾಹಿತ್ಯಕ ಆಧಾರಗಳಲ್ಲಿ ಕಂಡುಬರುತ್ತಿಲ್ಲ.

---

2 ರಾಮಾಯಣ, ಬಾಲಕಾಂಡ, ಅಧ್ಯಾಯ ೪೮

3 ಬ್ರಹ್ಮಪುರಾಣ, ಅಧ್ಯಾಯ ೮೭

4 ಸಿ. ಎಚ್. ಟಾನ್ನಿ (ಅನುವಾದ) : ಕಥಾಸರಿತ್ಸಾಗರ, ಪು. ೧೨೨-೨೩

5 ಮಹಾಭಾರತ, ಉದ್ಯೋಗಪರ್ವ, ಅಧ್ಯಾಯ ೧೨

6 ಕಥಾಸರಿತ್ಸಾಗರ